ಚುಕ್ಕೆ ಗುರುತಿಲ್ಲದ ಪ್ರಶ್ನೆ

# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 266

ಮಾನ್ಯ ಸದಸ್ಯರ ಹೆಸರು : ಶ್ರೀ ಅರವಿಂದ ಕುಮಾರ್ ಅರಳಿ (ವಿಧಾನ ಸಭೆಯಿಂದ ಚುನಾಯಿತರಾದವರು)

ಉತ್ತರಿಸಬೇಕಾದ ದಿನಾಂಕ : 09-12-2020

ಉತ್ತರಿಸುವ ಮಾನ್ಯ ಸಚಿವರು : ಮಾನ್ಯ ಕೃಷಿ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೀದರ್ ಜಿಲ್ಲೆ ಪ್ರಧಾನ ಮಂತ್ರಿ ಫಸಲ್ ಬೀಮಾ ಯೋಜನೆ ದೇಶದಲ್ಲಿಯೇ ಪ್ರಥಮವಾಗಿದ್ದು, ಈ ಯೋಜನೆಯಡಿಯಲ್ಲಿ ಕಾನೂನನ್ನು ಸರಳೀಕರಣಗೊಳಿಸಿ ಪ್ರತಿ ರೈತರಿಗೆ ವಿಮೆ ತಲುಪುವಂತೆ ಮಾಡುವ ಯೋಜನೆಯೇನಾದರೂ ಸರ್ಕಾರದ ಮುಂದಿದೆಯೇ; ಹಾಗಿದ್ದಲ್ಲಿ, ಯಾವ ರೀತಿ ಕ್ರಮ ಕೈಗೊಳ್ಳಲಾಗುವುದು? (ವಿವರ ನೀಡುವುದು) | 1999-2000 ರಿಂದ ಬೆಳೆ ವಿಮೆ ಯೋಜನೆಯನ್ನು ರಾಷ್ಟ್ರೀಯ ಕೃಷಿ ವಿಮೆ ಯೋಜನೆ (NAIS) ಎಂದು ಕೇಂದ್ರ ಸರ್ಕಾರದ ಸ್ವಾಮ್ಯದಲ್ಲಿ ಇರುವ Agriculture Insurance Company ಸಂಸ್ಥೆಯ ಮೂಲಕ ಅನುಷ್ಠಾನಗೊಳಿಸಲಾಗುತ್ತಿತ್ತು. ನಂತರ ಮಾರ್ಪಡಿಸಿದ ರಾಷ್ಟ್ರೀಯ ಕೃಷಿ ವಿಮೆ ಯೋಜನೆ (MNAIS) ಎಂದು ಮರುನಾಮಕರಣಗೊಳಿಸಲಾಯಿತು. 2016ರ ಮುಂಗಾರು ಹಂಗಾಮಿನಿಂದ ರಾಜ್ಯಾದ್ಯಂತ ಕರ್ನಾಟಕ ರೈತ ಸುರಕ್ಷಾ ಪ್ರಧಾನ ಮಂತ್ರಿ ಫಸಲ್ ಬೀಮಾ ಯೋಜನೆಯನ್ನು ಕೇಂದ್ರ ಸರ್ಕಾರದ ಮಾರ್ಗಸೂಚಿಯನುಸಾರ ಅನುಷ್ಠಾನಗೊಳಿಸಲಾಗುತ್ತಿದೆ.<br>ಈ ಯೋಜನೆಯನ್ನು 2020-21 ಸಾಲಿನಿಂದ ಕೇಂದ್ರ ಸರ್ಕಾರವು ಸರಳೀಕರಣಗೊಳಿಸಿರುವಂತೆ Revamped PMFBY ಮಾರ್ಗಸೂಚಿಯನ್ವಯ ಅನುಷ್ಠಾನಗೊಳಿಸಲಾಗುತ್ತಿದೆ. ಮುಂದುವರೆದು, ಈ ಯೋಜನೆಯಡಿಯಲ್ಲಿ ನೋಂದಾಯಿಸಿದ ರೈತರಿಗೆ ಪ್ರಕೃತಿ ವಿಕೋಪದಿಂದ ಸಂಭವಿಸುವ ಬೆಳೆ ನಷ್ಟಕ್ಕೆ ವಿಮೆ ಪರಿಹಾರವನ್ನು ಇತ್ಯರ್ಥಪಡಿಸಲಾಗುವುದು. ಕೇಂದ್ರ ಸರ್ಕಾರದಿಂದ ಮಾರ್ಗಸೂಚಿಯಲ್ಲಿ ಬದಲಾವಣೆಗಳಾದಲ್ಲಿ ಅದರಂತೆ ರಾಜ್ಯದಲ್ಲಿ ಈ ಯೋಜನೆಯನ್ನು ಅನುಷ್ಠಾನಗೊಳಿಸಲಾಗುವುದು. ಈ ಯೋಜನೆಯು ಕ್ಷೇತ್ರಾಧಾರಿತ ಹಾಗೂ ಇಳುವರಿ ಆಧಾರಿತ ಯೋಜನೆಯಾಗಿದ್ದು, |

| | | |
|---|---|---|
| | | ಮಾರ್ಗಸೂಚಿಯನುಸಾರ ಹೋಬಳಿ/ಗ್ರಾಮ ಪಂಚಾಯಿತಿ ಮಟ್ಟದಲ್ಲಿ ಆರ್ಥಿಕ ಮತ್ತು ಸಾಂಖ್ಯಿಕ ಇಲಾಖೆಯವರು ನೀಡುವ ಬೆಳೆ ಕಟಾವು ಪ್ರಯೋಗಗಳಿಂದ ಬಂದಂತಹ ವಾಸ್ತವಿಕ ಇಳುವರಿ ಮಾಹಿತಿಯು ನಿಗದಿಪಡಿಸಲಾದ ಪ್ರಾರಂಭಿಕ ಇಳುವರಿಗಿಂತ ಕಡಿಮೆ ಇದ್ದರೆ ಇಳುವರಿಯ ಕೊರತೆಗನುಗುಣವಾಗಿ ಹೋಬಳಿ/ಗ್ರಾಮ ಪಂಚಾಯಿತಿಗೆ ಅಧಿಸೂಚಿತ ಬೆಳೆಗಳಿಗೆ ನೋಂದಾಯಿಸುವ ಎಲ್ಲಾ ವರ್ಗದ ರೈತರು ಬೆಳೆ ವಿಮಾ ನಷ್ಟ ಪರಿಹಾರ ಪಡೆಯಲು ಅರ್ಹರಾಗಿರುತ್ತಾರೆ. |

**ಸಂಖ್ಯೆ:- ಕೃಇ/150/ಕೃಕೈಉ/2020**

(ಬಿ.ಸಿ.ಪಾಟೀಲ್)

**ಕೃಷಿ ಸಚಿವರು**